# ಅರ್ಪಣೆ

ಜೀವನವನ್ನೆಲ್ಲ ನಾಡಿನ ಏಳಿಗೆಗಾಗಿ ದುಡಿದು ಸವೆಯಿಸಿರುವ
ನಿಸ್ವಾರ್ಥ ಸಹಕಾರಿಯಾಗಿರುವ
ನನಗೆ ಪರಮಪೂಜ್ಯರಾಗಿರುವ

ಶ್ರೀಮಾನ್ ಮೊಳಹಳ್ಳಿ ಶಿವರಾಯರ

ಕರಕಮಲದಲ್ಲಿ

ಈ ನನ್ನ

ಮೊದಲ ಮೊಗ್ಗೆ

ಎಂಬ ಕಿರುಹೊತ್ತಗೆಯನ್ನು

ಭಯ ಭಕ್ತಿಗಳಿಂದ
ಸಮರ್ಪಿಸುತ್ತೇನೆ.

೩೧—೧—೧೯೫೩ —ಪಿ. ಕೆ. ನಾರಾಯಣ.

# ಅರಿಕೆ

"ಇರುಳು ಸಾಲೆ"ಯಲ್ಲಿದ್ದ ನನ್ನನ್ನು "ಹಗಲು ಸಾಲೆ"ಗೆಳೆದು ಜಗತ್ತಿನ ಬೆಳಕು ಇಷ್ಟಾದರೂ ನನ್ನ ಮೇಲೆ ಬೀಳುವಂತೆ ಮಾಡಿರುವ, ನನ್ನಲ್ಲಿ ನಾಡುನುಡಿಗಳ ಕುರಿತು ಜಾಗ್ರತಿಯನ್ನುಂಟುಮಾಡಿರುವ, ಮತ್ತು ನನ್ನಂತಹ ಸಾವಿರಾರು ಬಡವರಿಗೆ ಜೀವನದ ಮಾರ್ಗವನ್ನು ತೋರಿರುವ ಶ್ರೀಮಾನ್ ಮೊಳಹಳ್ಳಿ ಶಿವರಾಯರಿಗೆ ನನ್ನ ಮೊದಲ ಸಾಹಿತ್ಯ ಕೃತಿಯನ್ನರ್ಪಿಸಬೇಕೆಂಬ ಹಂಬಲದಲ್ಲಿದ್ದೆ. ಆ ಹಂಬಲವೇ ಈ ಕೆಲವು ಅಭ್ಯಾಸ ಕವನಗಳನ್ನು ಸಂಗ್ರಹಿಸಿ ಅಚ್ಚುಗೊಳಿಸಲು ಕಾರಣವಾಗಿದೆ.

ಇದೇ ೧೯೫೩ನೇ ಜನವರಿ ೩೧ರಂದು ಅವರು ನಮ್ಮ ಜಿಲ್ಲೆಯನ್ನು ಬಿಟ್ಟು ದೂರದ ಮದ್ರಾಸಿಗೆ ವಿಶ್ರಾಂತಿಗಾಗಿ ತೆರಳುವ ಈ ಪರ್ವ ಕಾಲದಲ್ಲಿಯೇ ಈ ಕಿರುಹೊತ್ತಗೆಯು ಅಚ್ಚಾಗಿ ಹೊರಬರುವಂತೆ ಸಹಕರಿಸಿದವರನ್ನು ನಾನು ಸ್ಮರಿಸಬೇಕು. ನನ್ನ ಕರಡು ಪುಸ್ತಕಗಳನ್ನೋದಿ ನೋಡಿ ಕವನಗಳನ್ನಾರಿಸುವಲ್ಲಿಯೂ, ಅವುಗಳನ್ನು ತಿದ್ದುವಲ್ಲಿಯೂ, ಸೂಕ್ತ ಸಲಹೆಗಳನ್ನಿತ್ತು ಪ್ರೋತ್ಸಾಹಿಸಿದ ಶ್ರೀ। ಸೇಡಿಯಾಪು ಕೃಷ್ಣಭಟ್ಟರಿಗೂ ಶ್ರೀ। ಬಿ. ಶಂಕರಭಟ್ಟರಿಗೂ ನನ್ನ ಕೃತಜ್ಞತೆಗಳು. ಈ ಪುಸ್ತಕವನ್ನು ಕೆಲವೇ ದಿನಗಳಲ್ಲಿ ಅಂದವಾಗಿ ಮುದ್ರಿಸಿಕೊಟ್ಟಿರುವ ಮತ್ತು ಅಚ್ಚು ಪ್ರತಿಗಳನ್ನು ತಿದ್ದುವ ಕೆಲಸದಲ್ಲಿ ನೆರವಾದ ಉದಯ ಪ್ರಿಂಟರಿಯ ಗೆಳೆಯ ಶ್ರೀ। ಶ್ರೀನಿವಾಸ ಉಡುಪರನ್ನೂ ಅಲ್ಲಿನ ಇತರ ಕೆಲಸಗಾರರನ್ನೂ ಅಭಿನಂದಿಸುತ್ತೇನೆ.

ಇಲ್ಲಿ ಅಚ್ಚಾದ ಕವನಗಳಲ್ಲಿ ಕೆಲವು, ಈ ಮೊದಲು ಕರ್ಮವೀರ, ಕನ್ನಡ ನುಡಿ, ಪ್ರಭಾತ, ಪ್ರಜಾಮತ, ನವಯುಗ, ಬಾಲಚಂದ್ರ, ಉಷಾ ಮತ್ತು ಸುಬೋಧ ಮುಂತಾದ ಪತ್ರಿಕೆಗಳಲ್ಲಿ ಬೆಳಕುಕಂಡಿವೆ. ಆಯಾ ಪತ್ರಿಕೆಗಳ ಸಂಪಾದಕರನ್ನು ಅವರು ನನಗಿತ್ತ ಪ್ರೋತ್ಸಾಹಕ್ಕಾಗಿ, ನಾನೀ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಕೊನೆಯಲ್ಲಿ, ಸಾರ್ವಜನಿಕ ಸೇವೆಯಲ್ಲೇ ದುಡಿಯುತಿದ್ದು ವಿಶ್ರಾಂತಿಯರಿಯದ, ವಿಶ್ರಾಂತಿ ಬಯಸದ ಶ್ರೀ ಶಿವರಾಯರಿಗೆ ಸಂತೋಷಕರವಾದ ವಿಶ್ರಾಂತಿಯೊದಗಲೆಂದೂ ಆಯುರಾರೋಗ್ಯ ಲಭಿಸಲೆಂದೂ ಹಾರೈಸಿ, ಈ ವರೆಗೆ ನನ್ನವಾಗಿದ್ದ ಈ ಕವನಗಳನ್ನು ಕನ್ನಡಿಗರ ಮಡಿಲಲ್ಲಿಡುತ್ತೇನೆ.

ಮಂಗಳೂರು,
31—1—1953.

ಪಿ. ಕೆ. ನಾರಾಯಣ.



# ಮೊದಲ ಮೊಗ್ಗೆ

ಅರ್ಪಣೆ
ಅರಿಕೆ
ಪರಿವಿಡಿ

ಮೊದಲ ಮೊಗ್ಗೆ

# ಕನ್ನಡ ನುಡಿ

೧

ನುಡಿ ನುಡಿ ನೀನುಡಿ! ಕನ್ನಡ ಸವಿನುಡಿ!
ನರುಗಂಪಿನಾ
ಉರು ಪೆಂಪಿನಾ
ಸಿರಿಗನ್ನಡ ನುಡಿ! ಸವಿಗನ್ನಡ ನುಡಿ!

೨

ಚಂಪೂಕಾವ್ಯದಿ ಉಕ್ಕಿ ಮೆರೆಯುತಿಹ
ಶೃಂಗಾರದಾ
ಗಂಭೀರದಾ
ಸಿರಿಗನ್ನಡ ನುಡಿ! ವರಕನ್ನಡ ನುಡಿ!

೩

ಷಟ್ಪದದಿಂ ಜನತೆಯ ಬಳಿಸಾರೀ
ಕತೆ ಪೇಳಿದಾ
ಮತಿ ನೀಡಿದಾ
ಸಿರಿಗನ್ನಡ ನುಡಿ! ಗುರು ಕನ್ನಡ ನುಡಿ!

೪

ವಚನದ ಹೊನಲಿಂ ನಾಡನು ತೊಳೆದಿಹ .
ಬಲು ಭಕ್ತಿಯಾ
ಸಲೆ ಯುಕ್ತಿಯಾ
ಸಿರಿಗನ್ನಡ ನುಡಿ ಚೆಲುಗನ್ನಡ ನುಡಿ.

೫

ಬುದ್ಧಿಯ ನೆಲೆಯಿಂ ಎದೆಯೆಡೆಗೋಡುವ
ಅತಿ ನಲ್ಮೆಯಾ
ಸತಿಯೊಲ್ಮೆಯಾ
ಸಿರಿಗನ್ನಡ ನುಡಿ! ನವ ಕನ್ನಡ ನುಡಿ!

೬

ಭಾರತಿ ಮೆಚ್ಚಿದ ನಚ್ಚಿನ ಕೆಚ್ಚಿನ
ಅಚ್ಚ್ಯುತವಹ
ಸಚ್ಚರಿತೆಯು
ಸಿರಿಗನ್ನಡ ನುಡಿ! ಜಯ ಕನ್ನಡ ನುಡಿ



# ಚೈತ್ರ ಬಂದಳು

೧

ಕುಳಿರ ಗಾಳಿ ಕಡಿಮೆಯಾಗಿ
ತಳಿರು ಚೆಲುವಿನಿಂದ ಬಾಗಿ
ಇಳೆಯು ತೊಳಗಿ ಬೆಳಗುತಿರಲು
ಚೈತ್ರ ಬಂದಳು
ಚೆಲುವ ತಂದಳು

೨

ಪುಷ್ಪವೆಲ್ಲವರಳುತಿರಲು
ತುಂಬಿಯೆಲ್ಲ ತಿರುಗುತಿರಲು
ಮಧುವಿನಾಸೆ ಹೆಚ್ಚುತಿರಲು
ಚೈತ್ರ ಬಂದಳು
ಮಧುವ ತಂದಳು

೩

ಭುವಿಯು ಚೆಲುವ ಸೂಸುತಿರಲು
ಕವಿಯ ಭಾವ ಬಳೆಯುತಿರಲು
ಸವಿಯ ಹೊನಲು ಹರಿಯುತಿರಲು
ಚೈತ್ರ ಬಂದಳು
ಜೀವ ತಂದಳು

೪

ಒಲವು ಗೆಲವ ನೋಡುತಿರಲು
ಗೆಲವು ಚೆಲುವ ಕೂಡುತಿರಲು
ಒಲವು ನೆಲೆಯ ಕಾಣುತಿರಲು
ಚೈತ್ರ ಬಂದಳು
ನಲವ ತಂದಳು

# ವಸಂತದುದಯ

೧

ಬೀಸಿತು ತಂಗಾಳಿ–
ಜೀವನ ವೈತಾಳಿ!
ಜಂಗಮ ಜಡದಲ್ಲಿ–
ಚಿಗುರಿತು ರಸವಲ್ಲಿ!
ಸುಮಗಳ ಕಾಸಾರ–
ಚೇತನ ಸಂಚಾರ!
ಆರಡಿ ಝೇಂಕಾರ–
ನವನವ ಓಂಕಾರ!

ವಸಂತದುದಯವಿದು
ಸಂತಸದೊಸಗೆಯಿದು!
ನಲವಿನ ನಂದನದ
ನವ ಸಂದೇಶವಿದು!!

೨

ಹಸುರಿನ ಹಾಸಿನಲಿ
ಹೂಹಣ್ ಹೆಚ್ಚಿನಲಿ!
ರಾಗದ ಮೇಳದಲಿ
ಯೋಗದ ಸಿದ್ಧಿಯಲಿ!

ಚೆಲುವಿನ ನೋಟಗಳು
ಗೆಲವಿನ ಆಟಗಳು!
ಸುಗ್ಗಿಯ ಕುಣಿತಗಳು
ಮನಸಿನ ಹೆಣಿತಗಳು!

ನವಯುಗದಾದಿಯಿದು–
ಭವಸುಖದಾದಿಯಿದು!
ಶಿವಸೌಂದರ್ಯವಿದು–
ತುರಿಯಾನಂದವಿದು!

—o▭oo▭o—

# ಹೂ

೧

ರವಿಯು ಮೂಡೆ
ಭುವಿಯು ಬೆಳಗೆ
ಹೂವೆ ನೀನು ಅರಳಿದೆ!
ಚೆಲುವಿನಿಂದ
ಒಲವಿನಿಂದ
ಬಲಿದು ನೀನು ಅರಳಿದೆ!

೨

ಕಂಪಿನಿಂದ
ಸೊಂಪಿನಿಂದ
ಇಂಪುವಡೆದು ಅರಳಿದೆ!
ಲೋಕವನ್ನು
ನಾಕದಂತೆ
ಸಾಕಲೆಂದು ಅರಳಿದೆ!

೩

ಒಲವಿನುಸಿರು
ಚೆಲುವಿನರಸು
ನಿನ್ನ ಹಿರಿಮೆ ಹಿರಿದೆಲೆ!
ನಲ್ಲೆಯರಿಗೆ
ಚೆಲುವೆಯರಿಗೆ
ನೀನೆ–ಹಿರಿಯ ಸಿರಿಯೆಲೆ!

೪

ರೂಪ ನೋಡಿ
ಭಾಪು ಯೆಂದು
ನರರು–ಕೊರಳ ಕೊಯ್ವರು!
ರೂಪಿಗಿಲ್ಲ
ಪಾಪ–ಪೂಜೆ
ಅರರೆ! ಸೃಷ್ಟಿಯಿಲ್ಲವೊ!

೫

ನಿನ್ನ ಗಾಡಿ
ಮುನ್ನ ಬಾಡಿ
ಸೊರಗೆ ದೇವ ನಿಯಮವೊ!
ಅದನು ನೋಡಿ
ಎದೆಯು ಬಾಡಿ
ಕೊರಗೆ–ನರನು ದೇವನೊ!

೬

ನಿನ್ನ ಚೆಲುವ
ನಿನ್ನ ಒಲವ
ರವಿಯು ಹೊಗಳಿ ತೆರಳುವ!
ಅದನು ತಿಳಿದು
ಅದನೆ ಬಗೆದು
ಕವಿಯು ತಾನು ಬರೆಯುವ!

# ಸಾಲಾಗಿ ಸಾಗುತಿಹ ಚಿಟ್ಟೆಗಳ ಕಂಡಾಗ!

ಒಟ್ಟಿನಲಿ ಸಾಲಾಗಿ ಸಾಗುತಿಹ ಚಿಟ್ಟೆಗಳೆ!
　　ದಿಟ್ಟತನದಿಂ ಪೋಪುದೆಲ್ಲಿಗಾರಿಹರಲ್ಲಿ?
　　ಬಟ್ಟೆಯಲಿ ಅರಳಿರುವ ಪುಷ್ಪಗಳ ಬಳಿಯಲ್ಲಿ
ಒಟ್ಟಾಗಿ ನಿಂತಿರ್ದು ಮಾಳ್ಪುದೇನೀ ರಗಳೆ?

ಚೆಲುವಾದ ಬಣ್ಣಗಳೆರಂಕೆಯಾ ವೈಸಿರಿಯು
　　ಬಲುಮೆಯಲಿ ಗಾಡಿವಡೆದಿರುವ ಕಣ್ಮಣಿಗಳೇ!
　　ಕಲಿತನದಿ ನಲಿನಲಿದು ನಡೆಯುತಿಹ ನಡೆಯನ್ನು
ಸಲಿಗೆಯಿಂದೊಲವಿನಿಂದಿತ್ತವರದಾರ್ ಪೇಳಿ?

ಹಸುರಾದ ಹೊಲದಲ್ಲಿ ನಸುನಕ್ಕು ಹಾರುತ್ತ
　　ಎಸೆಯುತಿಹ ಸೌಂದರ್ಯದಾ ಹೊಚ್ಚಕುಸುರುಗಳೆ!
　　ಜಸತಳೆದ ರೂಪವಿದ ಭಾಪೆಂದು ಪೊಗಳಲ್ಕೆ
ಹಸನಾಗಿ ನಿಮಗಿತ್ತ ಕಲೆಯರಸನಂ ಪೇಳಿ?

"ಮುಟ್ಟಲಿಹ ಗುರಿಯೊಂದೆ ನಮಗೆಲ್ಲ! ನಾವೊಂದೆ!!
ಸೃಷ್ಟಿಪತಿಯೊಲಿದಿತ್ತನೀ ಸೊಬಗ–ನಮಗಿಂದೆ"



# ಹೂ ಎಲ್ಲವು

"ನೀನೆಲ್ಲಿಗೆ
ಓ ಮಲ್ಲಿಗೆ?"
ಎಂದೆನಾಗ ಅರಳು ಮೊಲ್ಲೆ–
ಯನ್ನು ಕಾಣುತ!

"ನಾನಲ್ಲಿಗೆ
ಓ ಅಲ್ಲಿಗೆ"
ಎಂದಳಾಗ ಅರಳು ಮೊಲ್ಲೆ
ನನ್ನ ತೋರುತ!

"ಬಾ ಎಂದೆನೆ
ಓ ಎಂದೆನೆ?"
ಎಂದೆನಾಗ ಸುರಭಿ ಮೊಲ್ಲೆ–
ಯನ್ನು ದಿಟ್ಟಿಸಿ

"ಬಾ ಎಂದೆನೆ
ಓ ಎಂದೆನೆ?"
ಎಂದಳಾಗ ಸುರಭಿ ಮೊಲ್ಲೆ–
ನನ್ನ ದಿಟ್ಟಿಸಿ!

"ಮಾ ಇಲ್ಲವು!
ಓ ಎಲ್ಲವೂ!"
ಎಂದಿತಾಗ ಎನ್ನ ಮನದ
ಆಳದಾಳವು!

"ಹಾ ಎಲ್ಲವೂ
ಹೂ ಎಲ್ಲವೂ"
ಎನ್ನುತಾಗ ಮೊಲ್ಲೆಯೆನ್ನ
ಬಳಿಯ ಸಂದಳು!!



## ತುಂಬಿ

ಬಂಗಾರದಂತೆಸೆವ ತಿಳಿನೀರ ತೆರೆಯಲ್ಲಿ
ಹಸುರೆಲೆಯ ಮೇಲೆ ಮಲರಿಹುದು ಜೀವಸುಮ.
ಪಂಚದಲ ಪದ್ಮದಲಿ ಮಧುವನ್ನು ಹೀರುತಿದೆ
ನವಭಾವದಲಿ ತುಂಬಿ, ರಸಚಿತ್ತ ತುಂಬಿ.



# ಮುಗಿಲು

೧

ತಾಯಿಯನಗಲುತ ಪತಿಯನು ಸೇರುವ
ಪತಿಹಿತ ಸತಿಯಾ ತೆರದಲ್ಲಿ
ಕಡಲಿನ ಮಡಿಲನು ಬಿಡುತಲಿ ಬಾನನು
ಸೇರುತ ಬೆಡಗಿನೊಳಿಹೆ ಅಲ್ಲಿ

೨

ಭಾವವು ಮೊಳೆಯಲು ಬಯಕೆಯು ಹೆಚ್ಚಲು
ಧಾವಿಪ ವಿರಹಿಯ ತೆರದಲ್ಲಿ
ತಣಿಸಲು ಪೋಗುವೆ ಬೆಳೆದಿಹ ತರುಗಳ
ಸಹ್ಯಾದ್ರಿಯ ಕಿಬ್ಬದಿಯಲ್ಲಿ

೩

ನೀಲಿಯ ಹಸುರಿನ ಸೀರೆಯ ಸೆರಗನು
ಸರಿಸುತಲೋಡುವ ತೆರದಲ್ಲಿ
ಲೀಲೆಯ ಜಾಲದಿ ತೋರುತ ತೊಳಗುವ
ಬಾಲೆಯನಣಕಿಪೆ, ಬಾ ಇಲ್ಲಿ!

೪

ಪ್ರೇಮದ ಭಾವವನರಿಯದ ಎಳೆಯರ
ಚಂಚಲ ಮನಸನು ಹೋಲುತಲಿ
ಇಂತಿಹುದಂತಿಹುದೆಂತಿಹುದೆನ್ನಲು
ಅಂತಿಂತೆನುತಿಹೆ ಮಿಂಚುತಲಿ!

೫

ಘನವಾಗುತ ನಭಕೇರುತ ಮೆರೆಯುವ
ಪರಿಯಿದು ಸತ್ಯವು; ನವ ನವವು!
ರಸವಾಗುತ ತಿರೆಗಿಳಿಯುತ ಕಡಲನು
ಸೇರುವ ನಿನಗಿದು; ಭವಭವವು!

# ಪಯಣದ ಹಾಡು

೧

ರೈಲಿನಲ್ಲಿ ಕುಳಿತು ಕೊಂಡು
ಮಾತಿನಲ್ಲಿ ತೇಲಿ ಕೊಂಡು
ಭಾವದಲ್ಲಿ ಮುಳುಗಿ ಕೊಂಡು
ಪಯಣ ಬೆಳಸು ತಿಹುದು– ಅದು
ಏನು ಆನಂದವೊ
ಏನು ಆನಂದವೊ

೨

ಸಂಜೆ ರವಿಯು ಮುಳುಗುತಿರಲು,
ಹೊನ್ನ ಕಿರಣ ಬೀಳುತಿರಲು,
ಮೊಗದಿ ನಗೆಯು ಅರಳುತಿರಲು,
ಮೋದಗೊಳ್ಳು ತಿಹುದು–ಅದು
ಏನು ಆನಂದವೊ,.
ಏನು ಆನಂದವೊ

೩

ಸುತ್ತು ಮುತ್ತು ನೀಲ ಹಸುರು
ಬಿಳುಪು ಶ್ಯಾಮವರ್ಣದುಸಿರು,
ಬಳಸುತಿರಲು ತನುವ ಮರೆತು.
ಕಣ್ಗೆ ಹಬ್ಬಗೊಂಬುದದು.
ಏನು ಆನಂದವೊ
ಏನು ಆನಂದವೊ

೪

ಪಡುಗಡಲದು ಮೊಳಗುತಿರಲು
ಅಲೆಗಳೆದ್ದು ಉರುಳುತಿರಲು
ಮರಳಿನಲ್ಲಿ ಹೊರಳುತಿರಲು
ಮನದ ಭಾವ ಬೆಳೆವುದದು—
ಏನು ಆನಂದವೊ
ಏನು ಆನಂದವೊ

೫

ರವಿಯು ಮೂಡಿ ನಗತಲಿರಲು
ಭುವಿಯು ತಾನು ಬೆಳಗುತಿರಲು
ಕಡಲಿನೆಡೆಗೆ ಸಾಗುತಿರಲು
ಕೆಳೆಯರೆಲ್ಲ ಕಲೆವುದದು—
ಏನು ಆನಂದವೊ
ಏನು ಆನಂದವೊ

೬

ದೇಹಕಿರುವ ಭೇದ ಮರೆತು
ಆತ್ಮದೊಂದು ಕರೆಯನರಿತು
ನಕ್ಕು ನಲಿದು ಹಾರಿ ಚೀರಿ
ಒಲವ ರಾಜ್ಯಕೊಡುವದು—
ಏನು ಆನಂದವೊ
ಏನು ಆನಂದವೊ

——0——

# ಬೀದಿಯಲಿ ಬಿದ್ದಿದ್ದ ಚೆಂಗುಲಾಬಿಯ ಕಂಡು!

ತಾಯ್ಗಿಡದೊಳಿದ್ದ ಬೆಡಗಿನಿತಿಲ್ಲ! ಚೆಂಬಣ್ಣ
ಮಣ್ಣುಪಾಲಾಗಿಹುದು! ಮುಚ್ಚಿಹುದು ಸಿರಿಗಣ್ಣ
ಬಣ್ಣಿಸುತ ಪಿಡಿದೆತ್ತಿ ಸೂಡುವವರಿಲ್ಲೆನುತ
ಬಾಯ್ಬಿಟ್ಟು ಒರಲುತಿದೆ– ಎದೆಬಿಚ್ಚಿ ಕೊರಗುತ್ತ!

ಬಸಿರಿನೊಳು ಹುದುಗಿದ್ದ ಬಯಕೆಗಳೆನಿತೊ! ಆರು
ಬಲ್ಲರಾ ಒಡಲ ಬೇಗೆಯನು? ನವಯೌವ್ವನವು
ಮೆಲ್ಲಮೆಲ್ಲಡಿಯಿಡುವ ಗಾಡಿಯ ಬೆಡಗನಾವ
ಈಶ್ವರನಿಗರ್ಪಿಸಲು ಬಯಸಿದೆಯೊ! ಬಲ್ಲರಾರ್?

ಅರಳುತಿಹ ಮೊಗದಿಂದ ಪರಿಮಳಿಪ ನಿನ್ನನ್ನು
ಕೊರಳುಕೊಯ್ದೀ ಬೀದಿಗೆಸೆದ ನರರಕ್ಕಸನೆ!
ಅರುಹಲಂಜುವೆಯೇಕೆ ದುರುಳನಾ ಹೆಸರನ್ನು?
ಅರೆಚಣದ ಸುಖಕಾಗಿ ನಿನ್ನತುಳ ಸೌಂದರ್ಯ
ಸಿರಿಯನ್ನು ಮುರಿದಿರಿವ ನರನಲ್ಲಿ ಔದಾರ್ಯ
ವಿನಿತಿಲ್ಲ! ಗುಡಿಗಟ್ಟಿಹುದು ಸ್ವಾರ್ಥದಾ ಕ್ರೌರ್ಯ!

—·।·—

# ಮರಳಿನ ದಂಡೆ—ಚೆಲುವಿನ ಗೊಂಡೆ

ಮರಳಿನ ಕರೆಕರೆ!
ತೆರೆಗಳ ನೊರೆನೊರೆ!
ಸಂತಸದೊಸರು!
ಉಲ್ಲಸದುಸಿರು! ॥ ಪ ॥

೧

ಪಡುವಣ ಕಡಲಿನ
ದಡದಲಿ ಇಡುಗಿಹ
ಮರಳಿನ ದಂಡೆ!
ಚೆಲುವಿನ ಗೊಂಡೆ!
ಸೂರ್ಯನ ಕಿರಣಗ–
ಳೀಯುವ ವರ್ಣದಿ
ಹೊಳೆಯುವ ಮರಳು!
ಗಾಡಿಯ ಹರಳು!

೨

ಕಡಲಿನ ಮೊರೆಯನು
ಮರಳಿನ ಕರೆಯನು
ಕೇಳುವ ಬಾಳು!
ಶೌರ್ಯದ ಬಾಳು!

ಸಾವಿನ ಕೆಲದಲಿ
ಲೀಲೆಯೊಳಾಡುವ
ಕಲಿಗಳ ಬೀಡು!
ವೀರರ ನಾಡು!

೩

ಏರುವ ಹಾರುವ
ಹರಿಯುವ ಬಿರಿಯುವ
ತೆರೆಗಳ ಚೆಲುವು!
ಕಣ್ಣಿಗೆ ನಲವು!
ನೊರೆನೊರೆಯಾಗುವ
ಕರೆಕರೆ ಸೇರುವ
ನೊರೆಗಳ ಸೇಸೆ!
ಮುತ್ತಿನ ಸೇಸೆ!

೪

ಸಪ್ಪೆಯ ಜೀವನ
ಉಪ್ಪಿನ ಜೀವನ-
ವಾಗಿದೆ ನೋಡಿ!
ಸಿದ್ಧಿಯ ಹಾಡಿ!
ಸಾಗರ ಜೀವನ
ಮಾನವ ಜೀವನ
ವೆಂಬುದು ಮರ್ಮ!
ಇಂದಿನ ಧರ್ಮ!



# ಮಾಟಗಾತಿ

೧

ಸರಿದ ಸೆರಗ ಸವರಿಕೊಂಡು ಬರುತಿದಾಳೆ!
ಸರನೆ ಸರನೆ ನಡೆದು ಬೆಡಗ ಬೀರುತಾಳೆ!
ಕರದಿ ಕುರುಳ ನೀವಿ ಸೊಬಗ ಸೂಸುತಾಳೆ!
ಅರಳು ಮೊಗದಿ ಮಂದಹಾಸ ತೋರುತಾಳೆ!
ಬಾಲೆ ನಿನ್ನ ಬರವಿದೇಕೆ?
ಲೀಲೆಯಾಂತ ಬೆಡಗಿದೇಕೆ?
ಮೇಲು ತರದ ಸೊಬಗಿದೇಕೆ?
ಹಾಲನುಗುವ ನಗೆಯಿದೇಕೆ?

೨

ಹಜ್ಜೆಯನ್ನು ಎಣಿಸುವಂತೆ ನಡೆಯುತಾಳೆ!
ಲಜ್ಜೆಯನ್ನು ಮರೆಸುವಂತೆ ತೋರುತಾಳೆ!
ಬಿಜ್ಜೆಗಲಿತ ಬಾಲೆಯಂತೆ ಕಾಣುತಾಳೆ!
ಸಜ್ಜನರ್ಗೆ "ಕಾಮಸತ್ರ" ಎನ್ನುತಾಳೆ!
ನಿನ್ನ ಕಣ್ಣ ಮೂಲೆಯಲ್ಲಿ
ತನ್ನ ತಾಣವನ್ನು ಮಾಡಿ
ಕಾಮ ಕುಣಿವುದನ್ನು ಕಾಣೆ,
ಭಾಮೆ ಬರಿದೆ ಕುಣಿವೆಯೇಕೆ?

# ವಿಜಯ

ವಿಜಯ ನೀನು ಬಂದೆಯಾ?
ಮನಕೆ ಹರುಷ ತಂದೆಯಾ?

೧

ನಿನ್ನ ಬರವನಿದಿರು ನೋಡಿ
ವೇಳೆ ಮೀರಿತೆಂದು ಬಾಡಿ
ಮನದಿ ಕೊರಗುತಿರಲು ನೋಡಿ
ವಿಜಯ ನೀನು ಬಂದೆಯಾ?
ಮನಕೆ ಹರುಷ ತಂದೆಯಾ?

೨

ಸತ್ಯದೆಡೆಯ ಬಿಡದೆ ನಾನು
ನುಡಿದು ನಡೆದ ನಡೆಯೆ ಜೇನು
ಕಹಿಯು ನೀಡೆ ತಿಳಿದು ಏನು,
ವಿಜಯ ನೀನು ಬಂದೆಯಾ?
ಮನಕೆ ಹರುಷ ತಂದೆಯಾ?

೩

ಸಾವು ನೋವು ಬಾಳಿನಲ್ಲಿ
ತೂರಿ ಬರುವ ಸಂಧಿಯಲ್ಲಿ
ಮನದ ಜೇಗೆ ಹೆಚ್ಚಲಲ್ಲಿ
ವಿಜಯ ನೀನು ಬಂದೆಯಾ?
ಮನಕೆ ಹರುಷ ತಂದೆಯಾ?

೪

ಕೊರಳನಿರಿವ ಜನರನಿಂದು
ಕೆಳೆಯರೆಂದು ನಾನು ಬಗೆದು
ಮಡುವಿನೆಡೆಯ ಸಾಗೆ ತಿಳಿದು
ವಿಜಯ ನೀನು ಬಂದೆಯಾ?
ಮನಕೆ ಹರುಷ ತಂದೆಯಾ?

೫

ಶಾಂತಿಯುಳಿದು ಮನದ ಭಾವ
ಹುಡುಕುತಿತ್ತು ನುಡಿಯ ಮೇವ
ತಿಳಿದು ಯೆನ್ನ ಎದೆಯ ನೋವ
ವಿಜಯ ನೀನು ಬಂದೆಯಾ?
ಮನಕೆ ಹರುಷ ತಂದೆಯಾ?

೬

ಹಿರಿಯರನ್ನು ನೆನೆಯಲೆಂದು
ಕಿರಿಯರನ್ನು ಹರಸಲೆಂದು
ಪ್ರೇಮದಿಂದಲೆನ್ನ ಮುಂದು
ವಿಜಯ ನೀನು ಬಂದೆಯಾ?
ಮನಕೆ ಹರುಷ ತಂದೆಯಾ?

೭

ಕಂಪ ಬೀರುತಿರುವ ಬಾಲೆ
ಕರದಿ ಪಿಡಿದ ಪುಷ್ಪಮಾಲೆ
ಹಾಕಲೆನುತಲೆನ್ನ ಮೇಲೆ
ವಿಜಯ ನೀನು ಬಂದೆಯಾ?
ಮನಕೆ ಹರುಷ ತಂದೆಯಾ?

# ತಿಳಿದು ನೋಡೆ

ನೆನಪು ಮಾಡೆ! ತಿಳಿದು ನೋಡೆ!
ಓ...ಎನ್ನ–ಜೀವನದ ಹಾಡೆ!

೧

ರಾಮಚಂದ್ರ ಬಂದನಂತೆ
ಶಿವನ ಬಿಲ್ಲ ಮುರಿದನಂತೆ
ಶೌರ್ಯ ತೋರಿ ನಿಂದನಂತೆ
ಪತ್ನಿಯಾದಳ್ ಸೀತೆಯಂತೆ
ತಂದೆಗಾಗಿ ಕಾಡು ಅಂತೆ!
ನಿಂದೆಗಾಗಿ ಬಿಟ್ಟನಂತೆ
ವಿನಯಭಕ್ತಿ ಮೆರೆದಳಂತೆ
ಹೆಣ್ಣಿನಲ್ಲಿ ಹರಿಣಿಯಂತೆ
ಗುಣದಿ ನೋಡೆ ಶ್ರೇಷ್ಠಳಂತೆ
ಒಲುಮೆಗಿವಳೆ ಚಿಲುಮೆಯಂತೆ
ನೆನಪುಮಾಡೆ! ತಿಳಿದುನೊಡೆ!
ಓ...ಎನ್ನ–ಜೀವನದ ಹಾಡೆ

೨

ರೂಪವಮರೆಸಿ ಬಂದರಂತೆ
ಬಲವ ಮೇರಿದು ನಿಂದರಂತೆ
ಹೆಣ್ಣ ತಂದು ಹಣ್ಣಿನಂತೆ
ತಾವು ಹಂಚಿಕೊಂಡರಂತೆ
ಐದುಮಂದಿಗೊಬ್ಬಳಂತೆ
ಅವರ ಸುಖದಿ ಮೆರೆದಳಂತೆ
ಕಷ್ಟದಲ್ಲೆ ಒಲಿದಳಂತೆ
ಹೆಣ್ಣಿಗವಳು ಗಂಡಿನಂತೆ
ಗಂಡಿಗವಳು ಹೆಣ್ಣಿನಂತೆ
ತಿರೆಗೆ ಸಾರಿ ಪೇಳ್ವಳಂತೆ
ಶಕ್ತಿಯಂತೆ ಚಂಡಿಯಂತೆ
ಒಲುಮೆಗಿವಳೆ ಚಿಲುಮೆಯಂತೆ
ನೆನಪು ಮಾಡೆ! ತಿಳಿದು ನೋಡೆ
ಓ...ಎನ್ನ–ಜೀವನದ ಹಾಡೇ!

೩

ಗಂಡುಗಿಡವು ಸಿದ್ಧವಂತೆ
ಹೆಣ್ಣು ಬಳ್ಳಿ ಬದ್ಧವಂತೆ
ಗಿಡವ ಹತ್ತೆ ಬಳ್ಳಿಯಂತೆ
ಬಳ್ಳಿಗದುವೆ ಭಾಗ್ಯವಂತೆ
ಗಿಡಕೆಯಿದುವೆ ಭೋಗ್ಯವಂತೆ
ಹೆಣ್ಣಿಗೊಂದು ಶೀಲವಂತೆ
ಗಂಡಿಗೊಂದು ಠೀವಿಯಂತೆ
ಸತಿಗೆ ಪಾತಿವ್ರತ್ಯವಂತೆ

ಭಕ್ತಿಯಂತೆ ಮುಕ್ತಿಯಂತೆ
ಇಂಥ ಅಂತೆ ಕಂತೆಯಂತೆ?
ನೆನಪು ಮಾಡೆ! ತಿಳಿದು ನೋಡೆ!
ಓ...ಎನ್ನ-ಜೀವನದ ಹಾಡೆ!!

೪

ವಿಶ್ವಧರ್ಮವೊಂದ ನೆನೆದು
ದೇಹಕಿರುವ ಭೇದ ತೊರೆದು
ಆತ್ಮದೊಂದು ಬೆಳಕ ತಿಳಿದು
ಪ್ರೇಮವೊಂದೆ ಧರ್ಮವೆಂದು
ಕಾಮವನ್ನು ದೂಡಿ ನಿಂದು
ನಮ್ಮ ದಾರಿ ನಾವು ಹಿಡಿದು
ಸಮತೆಯೊಂದೆ ಬೆಳೆದು ಬೆಳೆದು
ನಾವು ನಗುತ ನಡೆದು ಮುಂದು
ಬಾಳ ಬೆಳಗುವಂತೆ ಮಾಡೆ!
ನಾಕವೊದಗುವಂತೆ ಮಾಡೆ!
ನೆನಪು ಮಾಡೆ! ತಿಳಿದು ನೋಡೆ!
ಓ...ಎನ್ನ-ಜೀವನದ ಹಾಡೆ!

# ಮುಗುದೆಯು ಮುಡಿದಳು ತಾವರೆಯು!

೧

ಅರುಣೋದಯದಲಿ ಕಂಗಳ ತೆರೆಯುತ
ಅರುಣನ ವರ್ಣವ ಹೀರುತ್ತ,
ಸುಮಧುರ ಗಂಧದ ಸಾರದಿ ಮೆರೆಯುತ
ಆರಡಿಗಾಸೆಯ ತೋರುತ್ತ,
ಕಾಸಾರದ ಸ್ನೇಹದಿ ಭಾಸ್ಕರನಂ
ವಿರಹಿಯ ತೆರದಲಿ ನೆನೆಯುತ್ತ,
ಸುಂದರ ಕೆಂದಾವರೆ ತಾನೆನುತಿದೆ
ಸೊಬಗಿನ ನಗೆಯನು ಬೀರುತ್ತ!

೨

ರಾತ್ರಿಯ ವೈರಿಯನೋಡಿಪ ತೆರದಲಿ
ಬೆಟ್ಟದ ಕೋಟೆಯನೇರುತ್ತ,
ಹಗೆಯಾ ಭಯದಲಿ ನಿದ್ರಾ ವಶದಲಿ
ಮಲಗಿದ ಲೋಕವ ನೋಡುತ್ತ,
ಸ್ವರ್ಣದ ವರ್ಣದ ಜೀವನ ಕಿರಣದಿ
ತಿರೆಯನು ಚೇತನಗೊಳಿಸುತ್ತ,
ಜನಗಳನೆಬ್ಬಿಸಿ, ವೈರಿಯನೋಡಿಸಿ,
ನಿಂದನು ಭಾಸ್ಕರ ನಗುನಗುತ!

೩

ಬೆಳಗಿನ ಜಾವಕೆ ಎದ್ದಿಹ ಮಾನಿನಿ
ಉದಯದ ಗೀತವ ಹಾಡುತ್ತ,
ನೀರಿನ ಕೊಡವನ್ನಾನಿಸಿ ನಡುವಿಗೆ
ಗಂಗೆಯ ತಡಿಯನು ಸೇರುತ್ತ,
ಅರಳಿದ ಕಮಲವ, ಮೂಡಿದ ನೇಸರ,
ಕಂಡಳು ಅಚ್ಚರಿಗೊಳ್ಳುತ್ತ,
ಚಾಗದ ಬಾಳಿನ ಸೈಪನು ಕಾಣುತ
ನಿಂದಳು ತನ್ಮಯವಾಗುತ್ತ.

೪

ಮನದಲಿ ಮೂಡಿದ ಭಾವನೆಗೊಲಿಯುತ
ಕೊಯ್ದಳು ಚೆಲುವಿನ ತಾವರೆಯ,
ರವಿಯನು ನೋಡುತ ಪತಿಕರಿಸೆನ್ನುತ
ತೋರ್ದಳು ಭಕ್ತಿಯ ಭಾವನೆಯ,
ಇತ್ತವಗೀವನು ಪುರುಷೋತ್ತಮನವ-
ನೆಂಬುದ ಬಲ್ಲನೊ ರವಿರಾಯ?
ಅಚ್ಚರಿಯಿಂದಗೋ! ನಗುವಿಂ ನಲಿಯುತ
ಮುಗುದೆಯು ಮುಡಿದಳು ತಾವರೆಯ!

# ತಂಗಿಯು ನೆನಪು

ಭೂಗಗನ ಮಧ್ಯಗಳ ಸೆರೆಗೊಂಡ ಬಿತ್ತರದ
ಜಗದಂತೆ ಮೂರುಕೋಣೆಯ ಮರುಕು ಮನೆಯಂದು
ಸೊಗವಡೆದು ಸಂತಸವ ಹೊರಹೊಮ್ಮುತೆಸೆದಿಹುದು
ಮಗನೊಂದಿಗೈತಂದು ನಿಂದೆನ್ನ ಸತಿಯಿಂದ;

ಕಂದನನು ಕೈಗೀವ, ಇತ್ತವನ ಬಳಿಕೆತ್ತಿ
ಮುದ್ದಿಸುವ, ಮುತ್ತಿನಾ ಮಾಲೆಯೊಳೆ ಮೊಲೆಯೂಡಿ
ಮುದ್ದುತನದಲ್ಲಿ ಮುಳುಮುಳುಗಿ ಸಂತಸಗೂಡಿ
ಬಂಧನದ ಬಿಡುಗಡೆಯನೊಂದಿದಳು ಎದೆಗೊತ್ತಿ.

ವರ್ತಮಾನವ ಮರೆತು ಭೂತಭಾವಿಗಳಲ್ಲಿ
ಸುಳಿದಾಡುತಿತ್ತು ತಿಳಿಯಾದೆನ್ನ ಮನವಂದು;
ಅಳಿವಿಲ್ಲದಾ ಪ್ರೇಮದರ್ಶನದಿ ಸೊಗವಡೆದು
ಅರ್ಥದಿಂ ಕೂಡಿಹುದು ಸಂಸಾರವೆನ್ನುತಲಿ.

ಸಾರಿ ಬಂತೆನ್ನ ಬಳಿಗಾಗ ತಂಗಿಯು ನೆನಪು!
ಸುರಿಯುತಿಹ ಕಂಬನಿಯೊಳೊದ್ದೆಯಾದುದು ಕದಪು!



# ಮೊದಲ ಮೊಗ್ಗೆ

೧

ಹಸನಾದ ಬಯಲಿನಲಿ ನಾ ಬಂದು ನಿಂದಾಗ
ಆಸೆಕುಡಿಯೊಡೆಯೆ, ಹೊಸ ನಂದನವ ನಿರ್ಮಿಸುವ
ಉತ್ಸಾಹವುಕ್ಕೆ, ಹೂಬಳ್ಳಿಯನು ನಾನಾಯ್ದು
ನಟ್ಟು ನೀರೆರೆಯಲ್ಕೆ ಚಿಗುರೇರಿ ಬೆಳೆದತ್ತು!
ಹೊಸತನದ ಹಸುರಿಂದ ಎಲೆದುಂಬಿ ಹಬ್ಬುತಿಹ
ಬಳ್ಳಿಯನು ಕಂಡು ಬಯಲನ್ನೆ ನಾ ಮರೆತಿದ್ದೆ.

೨

ಉಷೆ ಬಂದು ರವಿರಾಯ ಬಹನೆಂದು ತಿರೆಗರುಹಿ
ಹಿಂತಿರುಗಿ ಹೋಗುತಿಹ ವೇಳೆಯದು! ನಾನೆದ್ದು
ಸೂರ್ಯನಿಂ ಬೆಳಗುತಿಹ ಬಯಲಿಂಗೆ ಬಂದಾಗ
ನೋಡಿದೆನು ಮುದ್ದು ಲತೆ ಬೀರುತಿಹ ಗಾಡಿಯನು!
ಸೌಂದರ್ಯವೇ ಬಳ್ಳಿಯಾಗಿ ಬಳುಕುತ್ತಲಿದೆ!
ನನ್ನಿಯೇ ನನೆಯಾಗಿ ಕೊನರೊಡೆದು ಅಲುಗುತಿದೆ!

೩

ಹಸುರೆಲೆಗಳೆಡೆಯಲ್ಲಿ ಅಂಕುರಿಸಿ ತೋರುತಿದೆ
ನವನವೋನ್ಮೇಷವಹ ಮೊಗ್ಗೆಯದು ಸಿಂಗರದಿ
ಈ ಮೊಗ್ಗೆ ತಾನರಳಿ ಪರಿಮಳವ ತಿರೆಗೆಲ್ಲ

ಬೀರಲಿಹ ನಾಳೆಯನು ನಾ ನೆನೆದು ಸೊಗವಡೆದೆ!
ಈ ಬಳ್ಳಿಗೀ ಹೂವು! ಪೆಂಪು ಪೆರತಿಲ್ಲೆಂದು–
ಸಂತಸದ ಸಂಭ್ರಮದಿ ಮೈಮರೆತು ಮಲಗಿದ್ದೆ

೪

ಸುಖದಿಂದ ನಾನೇಳೆ ಹುಸಿಯಾಯ್ತು ನನ್ನೆಣಿಕೆ
ಚಿವುಟಿತ್ತು ಮೊಗ್ಗೆಯನು ಕಾಣದಾ ಕರವೊಂದು!
ನೋವಿನಲಿ ಮೈಯುಡುಗಿ ನಡುಗುತಿದೆಯೆನ್ನಲತೆ.
ಎನಗರಿಯದಂತೆ ನೋವೊಂದೆನ್ನ ಕೂಡುತಿದೆ;
ಶೂನ್ಯದಲಿ ನೋಡುತಿಹೆನಿಂದು, ಲತೆಯೆಡೆನಿಂದು,
ಮರೆತಿದ್ದ ಬಿತ್ತರದ ಚಿತ್ತರದ ಬಯಲನ್ನು!

# ಬಾ ಮೊಲ್ಲೆ; ಏಳು!

ನಾ ಬಲ್ಲೆನೀ ಕೊರಗ, ಓ ನಲ್ಲೆ ನೀ ಕೇಳು!
ಈ ಬಗೆಯು ತರವಲ್ಲ; ಬಾ ಮೊಲ್ಲೆ ಏಳು!

ಅರಳುತಿಹ ಪುಷ್ಪವದು ಹೊರಳುತ್ತ ತಾನುದುರಿ
ಮತ್ತಿನಾ ಫಲಕಾಗಿ ಸಂತಸದಿ ಲತೆಯು,
ಸೊಬಗನ್ನೆ ಸೂಸುತ್ತ, ಗೆಲವನ್ನೆ ಬಗೆಯುತ್ತ,
ಜಗಕೆಲ್ಲ ಉಲ್ಲಸವ ಬೀರುವುದ ಬಗೆಯು.

ಅಪಜಯವು ವಿಜಯವನು ಬಡತನವು ಲಕ್ಷ್ಮಿಯನು
ತರಲಿರುವ ಗೂಢವನು ಮರೆಯುವುದೆ ಹೇಳು?
ನಾನೊಲಿದು ನೀನೊಲಿದು ನಾವ್ ನಲ್ಮೆಯಲಿ ಕೂಡೆ
ಬಾಳಿನಾ ಬಯಲೆಲ್ಲ ಹಸನಹುದು; ಕೇಳು.

ಕೊರಗನ್ನು ಬಿಟ್ಟೇಳು, ಸೆರಗನ್ನು ಬಿಗಿಗಟ್ಟು,
ಸಂತಸದ ಮುಗುಳನ್ನು ಮೊಗದಲ್ಲಿ ತಾಳು;
ಈ ಕೈಗೆ ಆ ಕೈಯ್ಯ ನೀಡುತ್ತ ಬಾ ನಲ್ಲೆ,
ಸಂಸಾರದಾಟವನು ಆಡೋಣ; ಏಳು!

ನಾ ನಿನಗೆ, ನೀನೆನಗೆ ಸರಿಯೆಂಬ ಸಮತೆಯಲಿ
ಬಾಳಿನಾ ಬಾವುಟವ ಏರಿಸುತ ನಭದಿ,
ಆದರ್ಶ ಜೀವನದ ಸಚ್ಚಿದಾನಂದ ಸುಖ
ಈ ಜಗದಿ ನೆಲೆಗೊಳಲು ದುಡಿಯೋಣ,–ಭರದಿ!

# ತಾಯ್ತನದ ಹಿರಿಮೆ

೧

ಒಳಗುವರನಾ ಗೋರಿ,
ಕಣ್ಣವಬುಂದಿದೆ ಏರಿ,
ಅಲ್ಲೆ ನಿಂದಿಹ ಪಡೆದ ತಂದೆ!
ಕರದಿ ತುಂಬಿದ ಕೋವಿ
ಉದಕ ನಯನದಲೋವಿ!
ವಿಧಿಯಹಾಟವಿಂತಿಹುದೆ ತಂದೆ?

೨

[1] ಶೋಬುಲ್ಲನಾ ತಂದೆ
ದೇವಾಂಶನಾ ತಂದೆ
ನಿನಗೊಂದಿಸುವೆನೆಲೆ ತಂದ!
ಸುತನ ನೀ ನೆನೆನೆನೆದು
ಸುತನ ಗೋರಿಯ ಕಾದು
ಒಲವಿಂಗೆ ಕಲಶ ನೀ ತಂದೆ!

೩

ಭಾರತದ ಸೈನಿಕರು
ಬರಿ ಶಾಂತಿ ನೀಡುವರು,
ಭಕ್ತಿಯಲಿ ಕೆಳಗಿಟ್ಟೆ ಕೋವಿ!

---

1 ಹೈದರಾಬಾದಿನಲ್ಲಿ ರಝಾಕರರಿಂದ ಕೊಲೆಗೊಂಡ ಪತ್ರಿಕಾ ಸಂಪಾದಕ ಶೋಬುಲ್ಲಾ ಖಾನ್.

ಭಕ್ಷಿಪರ ನೋಡಿಸುತ
ರಕ್ಷಿಪರು ಬರಿ ನಗುತ
ಜಗವೆಲ್ಲ ಬಹುದು ಶರಣಾಗಿ!

೪

ಬಂದಿರುವ ಬಂಧುಗಳು,
ಕಣ್ಣೀರ ಕಣ್ಣುಗಳು!
[2]ಹಬಿಬುಲ್ಲನೆದೆ ಕರಗಿತಲ್ಲ!
ಕಣ್ಣೀರ ಜಲದಲ್ಲಿ
ಮುನ್ನೀರ ಮನದಲ್ಲಿ
ಕುಸಿದು ಕುಳಿತಿಹನಲ್ಲ! ಅಲ್ಲ!

೫

ಬಂದು ನಿಂದಳು ಮಾತೆ,
ಶೋಬುಲ್ಲನಾ ಮಾತೆ!
ಕರದಲಾನಿಸುತ ಪತಿಯನ್ನು
ಮುಂದೆ ತನಯನ ಗೋರಿ
ಹಡೆದವರು ಬಳಿಸೇರಿ!
ಘೋರವಿಲ್ಲಿದಕುಮಿಗಿಲಿನ್ನು!

೬

ಹನ್ನೊಂದು ಮಕ್ಕಳನು
ಪಡೆದಿರುವ ಭಾಗ್ಯವನು
ಆರೊಡನುಸುರುವೆ ನೀನಿಂದು?
ಎಲ್ಲರನು ಕಳಕೊಂಡ,
ಒಬ್ಬನಲೆ ಮುದಗೊಂಡ,
ನಿನಗಾಯ್ತೆ ಈ ಬನ್ನವಿಂದು?

---

2 ಶೋಬುಲ್ಲಾ ಖಾನನ ಮುದಿ ತಂದೆ.

೭

ಸೋದರತೆ ಬೆಳೆಬೆಳೆದು
ಮಾನವತೆ ಸುಖತಳೆದು
    ಜಗಬೆಳಗಲೆಂದವನ ಮಾತೆ,
ಧರ್ಮವನು ತಿಳಿವಲ್ಲಿ,
ಸತ್ಯದಲಿ ನಡೆವಲ್ಲಿ,
    ಬನ್ನವಿದು ಬಾಯ್ಬಿಟ್ಟ ಬಂತೆ?

೮

ಸೋದರರು ಆ ಹತ್ತು
ಕೂಡಿದ್ದರೀ ಹೊತ್ತು
    ಹೈದರಾಬಾದಿಗೇಂ ಕುತ್ತು?
ಶೋಬುಲ್ಲನಾ ಕೂಡೆ
ಅವರೆಲ್ಲರೊಡನಾಡೆ
    ಜಗಕೆಲ್ಲವದುವೆ ಸಂಪತ್ತು!

೯

ರಝಾಕರರ ತಿವಿತಕ್ಕೆ
ತವ ಸುತನ ತನು ಸಿಕ್ಕೆ
    ಮಾತೆ! ನೀನೆಂತು ಸಹಿಸಿದೆಯೊ!
ನಿನ್ನಳಲ ಭಾವಿಸುತ
ದುಃಖದಲಿ ಮುಳುಗುತ್ತ
    ಮರುಗುತಿಡೆ, ನಿನಗೆ, ಜಗವಯ್ಯೊ!

೧೦

ಬರಸಿಡಿಲು ಬಡಿಯಲ್ಕೆ
ಹಡೆದೊಡಲು ಉರಿಯಲ್ಕೆ
    ಜಗಬೆಂದು ಕರಿಗೊಂಬುದಲ್ತೆ!

ಬರಸಿಡಿಲ ಧರಿಸುತ್ತ
ಒಡಲುರಿಯ ತಾಳುತ್ತ
ಜಗದಂಬೆ ನೀನಿಂದೆಯಲ್ತೆ!

೧೧

ಮುಡಿಯಲ್ಕೆ ಕವಲಾಲ
ನುಡಿದೆ "ಜವಹರಲಾಲ
ನೆನಗಿಹನು ವರಲಾಲ"ನೆಂದು
ತ್ಯಾಗಕಿದುವೇ ಭಾಗ್ಯ!
ನಿನಗಾಗೆ ಸೌಭಾಗ್ಯ!
ಮಣಿದೆನುವೆನುಷೆಯುಷೇ — ಎಂದು

೧೨

ನಿನ್ನ ತಾಯ್ತನದಂದ
ಜಗಕಿದುವೆ ಆನಂದ,
ಭಾರತಿಯು ತಾಯ್ತನಕೆ ಚೆಂದ!
ತಾಯ್ತನದ ಹಿರಿಮೆಯಿದು,
ಸುಫಲ ಸಂಸಾರಕಿದು,
ರಾಷ್ಟ್ರಕಿದು ಕಲ್ಯಾಣದೊಸಗೆ!

# ಸರೋಜಿನೀ ದೇವಿಗೆ

೧

ದೇಹಕು ಮನಸಿಗು ನಡೆದಾ ಸ್ಪರ್ಧೆಯು
ಸಮ ಫಲವೆರಡರ ಬೆಳವಣಿಗೆ!
ಸುಂದರ ದೇಹಕೆ ಬಂಧುರ ಮತಿಯಿದು
ಎಸೆದಿದೆ ಜಗದಲಿ ಸೊಗವಾಗೆ!

೨

ರಾಗದಿ ರಂಜಿಪ ಜೀವನ ವೀಣೆಯು
ಮಿಡಿಯುವ ತಪಸಿನ ರಸಯೋಗಿ!
ರಾಷ್ಟ್ರವ ಬೆಳಗಿಪ ಜನಪದ ಜೀವನ
ಕೋಸುಗ ದುಡಿಯುವ ಕೃತಿಯೋಗಿ!

೩

ಜಾತಿಯು ಕಟ್ಟಳೆ ಪ್ರಾಂತದ ಮೇರೆಯು
ದಾಟುತ ನಿಂತಿಹ ವರ ಪ್ರೇಮ!
ಆಳಿನ ಬಾಳಿಗೆ ಅರಸನ ಮುಕುಟವ
ನೇರಿಸಿ ನಿಂತಿದೆ ಜನಕಾಮ!

೪

ಹರೆಯಕು ಮುಪ್ಪಿಗು ಅಂತರವೆಲ್ಲಿದೆ
ಯೆನ್ನುತ ನಿಂತಿಹ ಮತಿಶಕ್ತಿ!
ವರಸಂಜೀವಿನಿ ಯಿದುವೆ ಸರೋಜಿನಿ
ಭೂಸಂಮೋಹನ ಸ್ತ್ರೀ ಶಕ್ತಿ!

———o———

# ನಿನಗಕ್ಕೆ ಗೆಲವು

ಸೋದರತೆ ಸರಿಸರಿದು ವೈಷಮ್ಯ ಬಲಿಯುತಿರೆ;
ಮಾನವತೆಯುಳಿದಳಿದು ದಾನವತೆ ಬೆಳೆಬೆಳೆದು
ಜನಜನವ ನುಂಗುತಿರೆ; ಪುರವೆಲ್ಲ ನೆಲವಿಡಿದು
ಕಸವಾಗುತಿರೆ; ಸಂಸ್ಕೃತಿ ಧ್ವಂಸವಾಗುತಿರೆ;
ಅಹಿಂಸಾ ಧರ್ಮವುಂ ಸತ್ಯದಾ ಪಥದಲ್ಲಿ
ತಿರೆಗೆಲ್ಲ ಸಾರಲ್ಕೆ ಭಾರತವೆ ಭವ್ಯವಹ
ಕ್ಷೇತ್ರವೆಂದೆಣಿಸಿ ನೀ ಕಾರ್ಯರಂಗಕಿಳಿದಿಹ
ಮರ್ಮವುಂ ಜಗದ ಮುಂದಿಟ್ಟೆ ನಯನುಡಿಯಲ್ಲಿ!

ದಬ್ಬಾಳಿಕೆಯ ಕೊಬ್ಬಿನಿಂದುಬ್ಬಿರುವ ಲೋಕ
ವಿದನಿಂದು ಅರಿಮನದಿ ಮೆಚ್ಚುತಿರೆ; ಮೇಣರ್ಥ
ಮನದಲ್ಲಿ ಹಳಿಯುತಿರೆ; ಸತ್ಯಾಗ್ರಹಿಯ ಧರ್ಮ
ವಿದೆನುತ ಪ್ರಾಯೋಪವೇಶದಿಂ ಬಹನಾಕ-
ವೆಂತೆಂದು ಜಗಕೆಲ್ಲ ಸಾರಿರುವ ಗಾಂಧಿಗುರು,
ತಿರೆಗೆಲ್ಲ ಶಾಂತಿಯೈತಂದು, ನಿನಗಕ್ಕೆ ಗೆಲವು!

— ——○——— —

# ವೀರಭದ್ರ

ಮುಗಳಿಂದು ಬಗೆದಿಲ್ಲ! ಹಗೆಯೊಂದು ಒಗೆದನಲ!
ಜಗದಲ್ಲಿ ಮಾನಿನಿಯು ಮಾನವನು ಕೀಳ್ದನೇ?
ತಗದಕಾರ್ಯವನಿಂತು ಖೂಳತಾನೆಸಗಿದನೆ?
ಹಗರಣವ ಹಮ್ಮಿನಿಂ ಮಾಡಿದನೆ? ಧೂರ್ತಖಲ!
ಮಾನಿನಿಯು ಮಾತೆಯೆಂಬುದನು ಮರೆದನೆ ನರನು!
ಹಾನಿಯಾಯ್ತಿದರಿಂದ ಜಗಕಿನ್ನು ಒಳಿತಿಲ್ಲ!
ಮಾನಿನಿಗೆ ಮಾನವನು ಮಾಡಿದಪರಾಧವನು
ನಾನಿನ್ನು ಮರೆಯೆನೆನ್ನುತ ಶಿವನು ಶಕ್ತಿಯಿಂ
ಭಾಂಕರಿಸೆ ಉದ್ಭವಿಸಿತೊಂದು ತೇಜೋಶಕ್ತಿ
"ಖೂಳರನು ತರಿಯುವುದು! ಬಾಳನ್ನು ಬೆಳಗುವುದು!
ಹಾಳಾದುದನು ಹೊಳೆವ ತೆರದಲ್ಲಿ ಮಾಡುವುದು"
ಎನೆ ಶಿವನು, ಶಿರಬಾಗಿ, ಖಳರನ್ನು ಕೊಲೆಗೈದು
ಘನವೀರಭದ್ರನಾಯ್ತಾಶಕ್ತಿ ಮೆರಿಮೆರಿದು!



# ಅವಳಾರು?

೧

ಹೈಮಗಿರಿಯ ಮಕುಟವಿಟ್ಟು,
ಗಂಗೆ ಯಮುನೆ ಹಾರ ತೊಟ್ಟು,
ಬಯಲ ಹಸುರು ಸೀರೆಯುಟ್ಟು,
ಮೆರೆವ ದೇವಿಯಾರ್?
ಕಡಲ ಮೇಲೆ ಪವಡಿಸುತ್ತ
ಲಿರುವ ದೇವಿಯಾರ್?

೨

ಕೃಷ್ಣನೊರೆದ ಗೀತೆಯನ್ನು
ಬುದ್ಧನಾ ಅಹಿಂಸೆಯನ್ನು
ಲೋಕಕೆಲ್ಲ ಸಾರುತಿರುವ
ತತ್ವದೊಡತಿಯಾರ್?
ಲೋಕದಿಂದೆ ಪೂಜೆಗೊಂಬ
ಪುಣ್ಯವಂತೆಯಾರ್?

೨

ಚಂದ್ರಗುಪ್ತ ಮೌರ್ಯನಿಂದ
ಕೃಷ್ಣದೇವರಾಯನಿಂದ
ರಾಜ್ಯಕಟ್ಟಿ ಪೂಜ್ಯಳಾದ
ದೇವಿರಾಣಿಯಾರ್?
ರಾಜಮಾತೆಯಾಗಿ ಮೆರೆದ
ಜನದ ಜನನಿಯಾರ್?

೩

ಕಾಳಿದಾಸ ಪಂಪರಿಂದ
ತುಲಸಿದಾಸ ಕನಕರಿಂದ
ಕಾವ್ಯನೀತಿ ನೀಡಿದಂಥ
ಖ್ಯಾತ ಮಾತೆಯಾರ್?
ಬಿಜ್ಜೆಯಿಂದ ಪಜ್ಜಳಿಸುವ
ವಾಣಿವರದೆಯಾರ್?

೪

ಭರತನಾಟ್ಯ ನೋಟವನ್ನು
ಭರತಗಾನ ತಾನವನ್ನು
ಧರಣಿತಲದ ಜನರಿಗಿತ್ತ
ಕಲೆಯ ಅರಸಿಯಾರ್?
ಧರಣಿಗಿಂತು ರತ್ನಳಾದ
ಸಿರಿಯ ಮಣಿಯದಾರ್?

೬

ಅನ್ಯರೆಂದು ತಿಳಿಯದೆಲ್ಲ
ಜನರು ಬಂದು ಮತವನೆಲ್ಲ
ಸಾರಿದುದನು ಸಹಿಸಿಕೊಂಡ
ಸಹನಶೀಲೆಯಾರ್?
ಸರ್ವ ಮತದ ಮಾತೆಯಾದ
ಪ್ರೇಮದಾತೆಯಾರ್?

೭

ಅವಳೆ ನಮ್ಮ ದೇಶಮಾತೆ
ಅವಳೆ ನಮ್ಮ ಜನ್ಮದಾತೆ
ಅವಳ ಸೇವೆಗಾಗಿ ನಮ್ಮ
ತನುವ ಸವೆವೆವೂ
ಅವಳ ಹಿರಿಮೆಗಾಗಿ ನಮ್ಮ
ಜೀವಕೊಡುವೆವೂ

——o▭o——

# ಕನಸಲ್ಲ ನೆನಸು

ಬೆಳಕಿಲ್ಲದಾ ಬಾಳಿನಲಿ ಬಳಲಿ ಬಂದಿಹೆವು,
ಬೆಳಕಿತ್ತು ಬೆಳಗಿಸೀ ಬಾಳನೆಲೆ ಬೆಳಕೆ!

ಒಗ್ಗಟ್ಟನೊಡೆದಾಯ್ತು! ಮತ್ಸರದಿ ಬೆಳೆದಾಯ್ತು
ಸಗ್ಗದಾ ಸುಧೆಯಿದ್ದ ಬಾಳು ಬರಿದಾಯ್ತು!
ಬಗ್ಗಿಸಿದುದಾಯ್ತೆಮ್ಮ ತಲೆಯನ್ನು ದಾಸ್ಯಕ್ಕೆ;
ಕುಗ್ಗಿದಾ ಶಿರವನ್ನು ಹಿಗ್ಗಿಸೆಲೆ ಬೆಳಕೆ!

ನಮ್ಮ ನಾಡಿದು, ನಮ್ಮ ಜನತೆಯಿದು ನಮ್ಮ ನುಡಿ,
ನಮ್ಮದೀ ಭಾವಗಳನುಳಿದಿಹೆವು ನಾವು!
ನಮ್ಮದೆಂಬುವ ಹಿರಿಮೆಯಿಲ್ಲದಾ ಹುಂಬರಲಿ
ನಮ್ಮದೆಂಬಾತ್ಮಧೈರ್ಯದ ಕಿಚ್ಚನುರಿಸು!

ನೂರಾರು ಜಾತಿಗಳು—ನೀತಿಯನಿತಿಲ್ಲದಿವೆ!
ನೂರಾರು ಭಾಷೆಗಳು—ಸತ್ವವಿಲ್ಲದಿವೆ!
ನೂರಾರು ತೆರದಲ್ಲಿ ನುಚ್ಚುನೂರಾಗಿಹುದು
ಸಾರವಾಗಿಹ ಬಾಳು! ಈ ಬಾಳ ಬೆಳಗು!

ಆದುದಕೆ ಕೊರಗಿಹೆವು! ಮುಸುಕನ್ನು ತೆಗೆದಿಹೆವು!
ಕಾದುವಾ ಕೈದುಗಳ ನೀಡಿ ಮುನ್ನಡೆಸು!
ಕಾದುವೆವು ಜಯದಲ್ಲಿ! ಬಿಡುಗಡೆಯು ಭಾರತಿಗೆ!
ಮೋದವದು ಜಗಕೆಲ್ಲ! ಕನಸಲ್ಲ ನೆನಸು!



# ಕ್ರಾಂತಿಗಾಗಲಿ ಜಯವು

ಕ್ರಾಂತಿಗಾಗಲಿ ಜಯವು! ಕ್ರಾಂತಿಗಾಗಲಿ ಜಯವು!
ಜನವೆಲ್ಲ ಒಂದೆಂಬ ಸಂಕ್ರಾಂತಿನಿಂದು!!

ವರ್ಗಕುಲ ಭೇದವಳಿಯುತ್ತಲೀ ಭೂಮಿಯಲಿ
ಸ್ವರ್ಗಸುಖ ಸಂಪತ್ತು ಸಮಭಾವ ಬೆಳೆದು;
ಜನಶಕ್ತಿ ತಾನೆದ್ದು, ಹೊರಶಕ್ತಿ ಹೊರನಡೆದು,
ಘನವಾದ ಜನರಾಜ್ಯತಾ ಬೆಳೆದು ಬೆಳೆದು—
ಕ್ರಾಂತಿಗಾಗಲಿ ಜಯವು! ಕ್ರಾಂತಿಗಾಗಲಿ ಜಯವು! ॥ ೧ ॥

ಆಳಿನಾ ದೀನತೆಯು, ಅರಸನಾ ಕ್ರೂರತೆಯು,
ಸಿರಿತನದ ಕಾಮಾಂಧ ಮುನಿಸೆಲ್ಲ ಅಳಿದು;
ಆಳಿನಾ ಮಾನ್ಯತೆಯು, ಅರಸನಾ ದೀನತೆಯು
ಗೆಳೆತನದ ಸುಖ ಸಮತೆಯೆಲ್ಲೆಲ್ಲು ಬೆಳೆದು—
ಕ್ರಾಂತಿಗಾಗಲಿ ಜಯವು! ಕ್ರಾಂತಿಗಾಗಲಿ ಜಯವು! ॥ ೨ ॥

ವ್ಯಾಪಾರ ವ್ಯವಹಾರವೆಲ್ಲೆಲ್ಲು ಸ್ವಾರ್ಥದಿಂ
ಭಂಡಾರ ಬೆಳೆಸುತಿಹ ರೂಢಿಯುಳಿದಳಿದು—
ವ್ಯಾಪಾರ ವ್ಯವಹಾರವೆಲ್ಲೆಲ್ಲು ತ್ಯಾಗದಲಿ
ಸೋದರತೆ ಬಳೆಯುತಿಹ ರೂಢಿ ಬೆಳೆಬೆಳೆದು—
ಕ್ರಾಂತಿಗಾಗಲಿ ಜಯವು! ಕ್ರಾಂತಿಗಾಗಲಿ ಜಯವು! ॥ ೩ ॥

ಬಿಜ್ಜೆಯಿಂ ಬಲಿತಿರುವ, ಕಜ್ಜವನು ಮಾಡದಿಹ,
ಬಿಜ್ಜೆವಳರೆಂದೆಂಬ ಸಂಜಾತನವಳಿದು—
ಬಿಜ್ಜೆಯಿಂ ಗೆಲಿದಿರುವ ಕಜ್ಜವನು ಮಾಡುತಿಹ
ಬಿಜ್ಜೆವಳರೆಂದೆಂಬ ನಮ್ರತನ ಬೆಳೆದು—
    ಕ್ರಾಂತಿಗಾಗಲಿ ಜಯವು! ಕ್ರಾಂತಿಗಾಗಲಿ ಜಯವು! ॥ ೪ ॥

ಸಿರಿವಂತ ಸಿರಿಹೀನ; ಸುಖವಂತ ಸುಖಹೀನ,
ಸ್ವಾರ್ಥಿಯಿವ ತ್ಯಾಗಿಯವನೆಂಬುದಿದು ಅಳಿದು—
ಸಿರಿಯಲ್ಲಿ ಸುಖದಲ್ಲಿ ತ್ಯಾಗದಲಿ ಸ್ವಾರ್ಥದಲಿ
ಸಿರಿಸಮತೆ, ಸುಖಸಮತೆ, ಚಿರಸಮತೆ ಬೆಳೆದು
    ಕ್ರಾಂತಿಗಾಗಲಿ ಜಯವು! ಕ್ರಾಂತಿಗಾಗಲಿ ಜಯವು! ॥ ೫ ॥

# ಬೆಳೆಯುತಿದೆ ಜನಶಕ್ತಿ

೧

ಪ್ರಕೃತಿಯಾ ಸೋಜಿಗವ
ತಿಳಿವಲ್ಲಿ ಮನಸೋತು
ದೇವನಂ ಭಾವಿಸಿತು
ಜನಶಕ್ತಿ ಮನದಿ;
ಭಕ್ತಿಯಾ ಜನವನ್ನು
ಪೂಜೆಯಲಿ ತಿನ್ನುತಿಹ
ಪೂಜಾರಿ ಪಂಜರವ
ನೊಡೆಯುತ್ತ ಭರದಿ
ಬೆಳೆಯುತಿದೆ ಜನಶಕ್ತಿ!
ಭಕ್ತಿಗಿದುವೇ ಮುಕ್ತಿ!

೨

"ದೇವನಿವ ನಮ್ಮವನು
ದೇವನವ ನಿಮ್ಮವನು"
ಎಂದೆಂಬ ಸ್ವಾರ್ಥದಲಿ
ಮಾನವರ ಕಡಿದು,

ರಕ್ತದೋಕುಳಿಯಲ್ಲಿ
ಚೆಲ್ಲಾಟವಾಡುತಿಹ,
ಧರ್ಮಾಂಧತೆಯನುಳಿದು
ದೇವನಂ ತಿಳಿದು—
ಬೆಳೆಯುತಿದೆ ಜನಶಕ್ತಿ!
ಧರ್ಮಕಿದುವೇ ಮುಕ್ತಿ!

೩

ಬಳೆಯುತಿಹ ಬಳಗಕ್ಕೆ
ಬೆಳೆಯುತಿಹ ರಾಜ್ಯಕ್ಕೆ
ನಲ್ಮೆಯಲಿ ಒಡೆಯನಂ
ಜನವೊಲಿದು ನಿಲಿಸೆ,
ಒತ್ತಿ ಜನವಿನಯವನು
ದರ್ಪದಿಂ ಬೆಳೆದಿರುವ,
ಒಡೆತನವ ಬಗ್ಗಿಸುತ
ನಲ್ಮೆಯಲಿ ಗೆಲಿದು,
ಬೆಳೆಯುತಿದೆ ಜನಶಕ್ತಿ!
ರಾಷ್ಟ್ರಕಿದುವೇ ಮುಕ್ತಿ!

೪

ಯಂತ್ರದಾ ಮಾಟದಲಿ
ಕುಮತಿಗಳ ತಂತ್ರದಲಿ
ತಾನಮರನೆನೆ ನಂಬಿ,
ಮನದಲ್ಲಿ ಉಬ್ಬಿ,
ಆಳರಸರೊಡಗೂಡಿ
ತನ್ನವರ ಮರ್ದಿಸುವ

ಪ್ರತಿಗಾಮಿ ಶಕ್ತಿಗಳ
ಪ್ರಗತಿಗೊಯ್ಯುತ್ತ
    ಬೆಳೆಯುತಿದೆ ಜನಶಕ್ತಿ!
    ಜನತೆಗಿದುವೇ ಮುಕ್ತಿ!

೫

ಬಿರುದಿನಾ ಸೊಕ್ಕಿನಿಂ,
ಕೀರ್ತಿಯಾ ಭ್ರಾಂತಿಯಿಂ,
ಮಂತ್ರಿಗಳ ತಂತ್ರದಿಂ,
ಸಾಮ್ರಾಜ್ಯ ಗಳಿಸಿ;
ತೊತ್ತುಗಳ ನೆರವಿಂದ
ಜನವನ್ನೆ ಬಿಗಿಯುತಿಹ
ಸಾಮ್ರಾಜ್ಯ ಶೃಂಖಲೆಯ
ಹೂಂಕರಿಸಿ ಬಿಡಿಸಿ,
    ಬೆಳೆಯುತಿದೆ ಜನಶಕ್ತಿ!
    ಲೋಕಕಿದುವೆ ಮುಕ್ತಿ!



# ಜಯಘೋಷ

ಭವ್ಯಭಾರತ ದಿವ್ಯಭಾರತವಿದೇಳುತಿದೆ।
ತಪಸಿನಲಿ ನಿಂದು—ಸ್ವಾತಂತ್ರ್ಯ ಪಡೆದು॥ ॥ ಪ ॥

ವೀರರನು ಬಲಿತೆತ್ತು ಜೈಲಿನಲಿ ನವೆದುದಕೆ।
ಗುಂಡಿಗೆದೆಗೊಟ್ಟು—ಧೈರ್ಯದಲಿ ನಿಂದುದಕೆ॥
ಬಡತನದ ಸಂಕಷ್ಟಗಳ ಸಹಿಸಿ ನೋಂತುದಕೆ।
ವಿಜಯವಿದು ಸ್ವಾತಂತ್ರ್ಯ! ಭಾರತಕೆ ವಿಜಯ॥ ॥ ೧ ॥

ದೇಗುಲದ ಬಾಗಿಲನು ತೆರೆಯಲ್ಕೆ ಕರೆಯಿತ್ತು।
ಧರ್ಮಾಂಧರೆಡೆಯಲ್ಲಿ ಧರ್ಮವನು ಸಾರಿ;॥
ಭಾರತವ ಬಿಟ್ಟಿನ್ನು ತೊಲತೊಲಗಿಯೆಂದೆಂದು।
ಕ್ರಾಂತಿಯನು ಮೆರೆಮೆರೆದ ಸ್ವಾತಂತ್ರ್ಯವಿಜಯ॥ ॥ ೨ ॥

ಸತ್ಯದಲಿ, ಹಿಂಸೆಯನು ತೊರೆದು, ಸತ್ಯಾಗ್ರಹದಿ।
ಸ್ವಾತಂತ್ರ್ಯಸಮರವನ್ನೆಸಗಿನಿಂದ;॥
ಗುರು ಗಾಂಧಿ, ವರ ನೆಹರು ಮೊದಲಾದ ನಾಯಕರ।
ಮುಂದಿಟ್ಟು ಕಾದಿರುವ ವೀರರಿಗೆ ವಿಜಯ॥ ॥ ೩ ॥

ಮೂಡಲಲಿ ಮೊರ್ಮಲೆವ, ಪಡುವಲಲಿ ಭೋರ್ಗರೆವ।
ತೆಂಕಿನಲಿ ಧೀಂಕಿಡುವ ಸಾಗರವ ಬಳಸಿ,॥
ಬಡಗಿನಲಿ ಬಿತ್ತರದ ಹಿಮಗಿರಿಯನೆಡೆಗೊಂಡು।
ಸುಖಭದ್ರಳಾಗಿರುವ ಭಾರತಿಗೆ ವಿಜಯ॥ ॥ ೪ ॥

ಜಗದೆಲ್ಲ ದಲಿತರೊಗ್ಗೊರಳಿನುಗ್ಗಡಣೆಯಿದು;।
ನಲುವತ್ತು ಕೋಟಿ ಕೊರಳುಗಳ ಉದ್ಘೋಷ॥
ಜಗದಲ್ಲಿ ಸ್ವಾತಂತ್ರ್ಯ ಸೌಹಾರ್ದ ನೆಲೆಗೊಳಿಪ।
ನವಯುಗವದೈತರುವ ಮಧುರ ಜಯಘೋಷ ॥ ೫ ॥

—o—

# ವಂದನವೀಧ್ವಜಕೆ—ವಂದನ

೧

ಏರುತ ಗಗನದಿ ಅರಳಿತು ಧ್ವಜ
ಸುದರ್ಶನಾಂಕಿತ ಅಶೋಕ ಧ್ವಜ
ಭಾರತಮಾತೆಯು ನಚ್ಚಿನ ಧ್ವಜ
ವಂದನವೀಧ್ವಜಕೆ—ವಂದನಾ!

೨

ಕೇಸರಿ, ಕೆಳಗಡೆಯೊಪ್ಪಿದೆ ಶ್ವೇತ
ಹಸುರದು ಮತ್ತಿದೆ; ನಮಗಿದು ಪ್ರೀತ
ಮೂರು ಬಣ್ಣದ ಧ್ವಜ—ಜಗಜೇತ
ವಂದನವೀಧ್ವಜಕೆ—ವಂದನಾ!

೩

ಶತಶತಮಾನದ ಸಮರಕೆ ವಿಜಯು
ಜನಪದಕಿದುವೆ ಸದಾಶಿವ ಸದಯು
ಭಾರತದ ಸ್ವಾತಂತ್ರ್ಯದ ಉದಯು
ವಂದನವೀಧ್ವಜಕೆ -ವಂದನಾ!

೪

ತ್ಯಾಗದ ಶೌರ್ಯದ ಗೆಲುವಿನಕುರುಹು
ಜಗಕೆಲ್ಲ ನವೋದಯದಾ ಹರಹು
ದಲಿತ ಜನಾಂಗದ ವಿಜಯದ ಬಲುಹು
ವಂದನವೀಧ್ವಜಕೆ—ವಂದನಾ!

೫

ರಾಷ್ಟ್ರಗಳೆಲ್ಲವು ಮನ್ನಿಪವಿದನು,
ಸಾವನು ಗಣಿಸದೆ ರಕ್ಷಿಪವಿದನು,
ನಾಡಿನ ಗೌರವ ಸಾಧನವಿದನು,
ವಂದನವೀಧ್ವಜಕೆ—ವಂದನಾ!

೬

ನವಜೀವನವೀಯುವ ನವಧ್ವಜ
ಭವತಾರಿಣಿ ಮಾತೆಯ ವರಧ್ವಜ
ಸ್ವಾತಂತ್ರ್ಯದಿ ಹಾರುವ ಈ ಶುಭ ಧ್ವಜ
ವಂದನವೀಧ್ವಜಕೆ—ವಂದನಾ!

೭

ಸತ್ಯದ ಶಾಂತಿಯ ಸಮತೆಯ ಗುರುತು
ರಾಜ್ಯದ ನೀತಿಯ ಪಥದಲಿ ಹೊಸತು
ಈ ಧ್ವಜಕೆಂಬೆವು ಜಯಜಯಜಯತು
ವಂದನವೀಧ್ವಜಕೆ—ವಂದನಾ!

———

# ಗಣರಾಜ್ಯ ಗೀತೆ

ಜಯ ಭಾರತ ಜಯ ಭಾರತ ಜಯ ಭಾರತವೆನ್ನಿ ॥ ಪ ॥

೧

ದಾಸ್ಯವನೋಡಿಸಿ, ಬಿಡುಗಡೆಯಾಡಿಸಿ,
ಲಾಸ್ಯವ ಜನವುನಕೊದಗಿಸುತೀಗ–
ಮೂಡಿತು ಭಾರತ ಗಣರಾಜ್ಯ!
ಹಾಡಿರಿ ಜನತೆಯು ಸಾಮ್ರಾಜ್ಯ!

೨

ಋಷಿಗಳ ತಪಸು, ಕವಿಗಳ ಕನಸು,
ಯೋಧರ ನೆನಸು, ಭಾರತ ಸೊಗಸು,
ನವೀನ ಭಾರತ ಗಣರಾಜ್ಯ!
ಸುವೀರ ಚರಿತೆಯ ಸಾಮ್ರಾಜ್ಯ!

೩

ಆರ್ಯರ ಮೊಗಲರ ಮ್ಲೇಂಛರ ಕ್ರೈಸ್ತರ
ಆಳಿಕೆ ಬಾಳಿಕೆಯಿಂದವತರಿಸಿದ
ಇಂದಿನ ಹಿಂದೀ ಗಣರಾಜ್ಯ!
ಎಂದಿಗು ಐಕ್ಯದ ಸಾಮ್ರಾಜ್ಯ!

೪

ಕೃಷ್ಣನ ಯೋಗವು ಬುದ್ಧನ ತ್ಯಾಗವು
ಗಾಂಧಿಯ ಸತ್ಯವು ಅಹಿಂಸೆಯೆಲ್ಲವು
ಬೆರೆತಿಹ ಭಾರತ ಗಣರಾಜ್ಯ!
ಮೆರೆಯಲಿ ಧರ್ಮದ ಸಾಮ್ರಾಜ್ಯ!

೫

ಸಮರದ ಮಾತನೆ ಜಗದಿಂ ತೊಲಗಿಸಿ,
ಸಮತೆಯು ನೀತಿಯು ಜಗದಲಿ ಹಬ್ಬಿಸಿ,
ಆಳಲಿ ಭಾರತ ಗಣರಾಜ್ಯ!
ಬಾಳಲಿ ಶಾಂತಿಯು ಸಾಮ್ರಾಜ್ಯ!

——o▭o——

# ಆಹ್ವಾನ

ಕನ್ನಡದ ತಾಯವ್ವ ಕರೆಯುವಳು ಕಂದರನು
ಸ್ವಾತಂತ್ರ್ಯ ಸುಗ್ಗಿಯಲ್ಲಿ ಓ ಎನ್ನಿಯೆನ್ನಿ
ಸಾಹಿತ್ಯ ಹಬ್ಬದಲಿ, ಕನ್ನಡದ ಕಬ್ಬದಲಿ
ಏಳೋಣ ಬಾಳೋಣ; ಓ ಬನ್ನಿ ಬನ್ನಿ ॥ ೧ ॥

ಪಂಪನಾ ಪೆಂಪನ್ನು, ಕಂತಿಯಾ ಕಾಂತಿಯನು
ರನ್ನನಾ ರಸಪಾಕವನು ಸವಿದು ಬನ್ನಿ
ನಾಗಚಂದ್ರನ ಜಾಣ್ಮೆ, ರಾಘವಾಂಕನ ಧೈರ್ಯ
ನಾರ್ಣಪ್ಪನಾ ಭಕ್ತಿಯನು ತಿಳಿದು ಬನ್ನಿ ॥ ೨ ॥

ಆಂಡಯ್ಯ ನಯಸೇನ, ರತ್ನಾಕರಾವರ್ಣಿ
ಸರ್ವಜ್ಞ ಮುದ್ದಣ್ಣರನು ತಿಳಿದು ಬನ್ನಿ
ಚಂಪು ಕಾವ್ಯದ ಬಿಗುಪು, ಷಟ್ಪದಿಯ ನುಡಿಯಿಂಪು
ವಚನಗಳ ಓಜೆಯನು ತಿಳಿಯುತ್ತ ಬನ್ನಿ ॥ ೩ ॥

ಕಾವೇರಿ ಗೋದೆಯರು, ಕೃಷ್ಣೆ ವರ ಭೀಮೆಯರು
ಸೀತೆ ನೇತ್ರಾವತಿಪಯಸ್ವಿನಿಯರೆಲ್ಲ
ಕಲಕಲನೆ ಸಲಿನಲಿದು, ನೊರೆಯೇರಿ ಹರಿಯುತಿಹ
ಸೊಬಗನ್ನು ಸಿರಿಯನ್ನು ಬಣ್ಣಿಸುತ ಬನ್ನಿ ॥ ೪ ॥

ತೆರೆಮುಸಗಿ ಭೋರ್ಗರೆವ ಕಡಲಿನಾ ಸಿರಿಯನ್ನು
ಮಾರ್ವಲೆತು ನಿಂದ ಸಹ್ಯಾದ್ರಿ ಬೆಡಗನ್ನು
ಹೊಂಬಾಳೆ ರಸದಾಳಿ ಮಾಮರದ ಬಯಲನ್ನು
ಮಲ್ಲಿಗೆಯ, ಕಂಪನ್ನು ಬಣ್ಣಿಸುತ ಬನ್ನಿ ॥ ೫ ॥

ಹಂಪೆಯಲಿ ಅಳಿದುಳಿದ ಶಿಲ್ಪಕಲೆಯದ್ಭುತವ
ಬೇಲೂರಿನಾ ಶಿಲೆಯ ಕುವರಿಯರ ಚೆಲುವ,
ಕಾರ್ಕಳದ ಕರ್ಗಲ್ಲ ಗೋಮಟನ ಸಿರಿ ಸೊಬಗ
ನುಡಿಯಲ್ಲಿ ರೂಪಿಸುವ ಶಿಲ್ಪಿಗಳೆ ಬನ್ನಿ ॥ ೬ ॥

ಜನತೆಯನು ಕಣ್ತುಂಬ ಕಾಣುತ್ತಲೈತನ್ನಿ
ಸಿರಿತನದಿ ಬಡತನದಿ ಬೆಳೆದವರ ಕಂಡು;
ಆ ಬಾಳನೀಗೋಳನೆಲ್ಲವನು ಚಿತ್ರಿಸುವ
ಜೀವನದ ಕಾವ್ಯವನು ಕನ್ನಡಿಸೆ ಬನ್ನಿ ॥ ೭ ॥

ರಾಷ್ಟ್ರಕೂಟ, ಕದಂಬ, ಚಾಳುಕ್ಯ, ಹೊಯ್ಸಳರು,
ವಿಜಯನಗರದ ವೀರ ದೊರೆಗಳಿಂ ಬೆಳೆದು,
ತುಳುನಾಡ ಚೌಟರಿಂ, ಕನ್ನಾಡ ಬಂಟರಿಂ
ಮೆರೆದಿರುವ ಕನ್ನಡದ ಬಾವುಟವ ತನ್ನಿ ॥ ೮ ॥

ಬಾವುಟವನೇರಿಸುತ, ಒಗ್ಗೊರಲಿನಿಂ ಹಾಡಿ,
ಕನ್ನಡದ ತಾಯವ್ವ ಬೆಳಗೆಂದು ಹಾಡಿ,
ನಿನ್ನ ಸುತರೆಲ್ಲರೊಂದಾಗಿ ಸುತೆಯರ ಕೂಡಿ
ಬಂದಿಹೆವು ಹರಸಮ್ಮಯೆಂದೆನುತ ಬೇಡಿ ॥ ೯ ॥

ಜಾತಿಮತದಲಿ, ಭಾಷೆ ರೀತಿಯಲಿ ಪುಡಿಯಾದ
ಕನ್ನಡವ ನೊಂದಾಗಿ ಕಟ್ಟಲಿಕೆ ಬನ್ನಿ
ಕನ್ನಾಡು ಭಾರತವು! ಭಾರತವೆ ಕನ್ನಾಡು
ಯೆಂದೆಂಬ ಮಂತ್ರವನು ಜಪಿಸುತ್ತ ಬನ್ನಿ ॥ ೧೦ ॥

ಸ್ವಾತಂತ್ರ್ಯ ಕ್ರಾಂತಿಗಳ ಜನದ ಸುಖಶಾಂತಿಗಳ
ಚಿತ್ರಿಸುತ ಹಾಡಲಿಕೆ ಬನ್ನಿನೀವ್ ಓಡಿ
ಹಿಂದಿನಾ ಸಂಸ್ಕೃತಿಯ, ಮುಂದಿನಾ ಫಲಶ್ರುತಿಯ
ಎಲ್ಲವನು ತಿಳಿಯುತ್ತೆ ನವಕಾವ್ಯ ಹಾಡಿ ॥ ೧೧ ॥



# ದೇವಮುರಲಿ

೧

ಸತ್ಯಧರ್ಮವೆಲ್ಲವಳಿದು
ಮಿಥ್ಯವೆಲ್ಲ ಜಗದಲಿಳಿದು
ತಾಂಡವಾಡಿ ರಕ್ಕಸುರಿಯೆ ಕೇಳ್ದಮುರಲಿಯೆ !
ಹಾಡಲರಿಯೆ ನಿನ್ನ ಶಕ್ತಿ ದೇವ ಮುರಲಿಯೆ !!

೨

ಸಜ್ಜನರನು ಕಷ್ಟಕಿಡುವ
ಬಿಜ್ಜೆ ಜಗದಿ ಬೆಳೆದು ಬರುವ
ಸಂಧಿ ಕಾಲದಲ್ಲಿಯೊರೆದ, ಸತ್ಯ ಮುರಲಿಯೆ !
ವಂದಿಸುವೆನು ನಿನಗೆ ಇಂದು—ದೇವ ಮುರಲಿಯೆ !!

೩

ಮಾತೆಯಲ್ಲಿ ಮಮತೆಯುನ್ನು
ತಾತನಲ್ಲಿ ಪ್ರೀತಿಯುನ್ನು
ಗೆಳೆಯರಲ್ಲಿ ಒಲವನೆಲ್ಲ ಸುರಿದ ಮುರಲಿಯೆ !
ತಿಳಿವೆನೆಂತು ನಿನ್ನ ಕರುಣೆ—ದೇವ ಮುರಲಿಯೆ !!

೪

"ಪ್ರೇಮದಲ್ಲಿ ಜಗದ ಪೆಂಪು
ಪ್ರೇಮದಲ್ಲೆ ಬಾಳಿನಿಂಪು"
ಪ್ರೇಮಗಾನವನ್ನು ನುಡಿದ ಪ್ರೇಮ ಮುರಲಿಯೆ!
ಪ್ರೇಮ ನಿನ್ನದತುಲವಯ್ಯ—ದೇವ ಮುರಲಿಯೆ!!

೫

ನಿನ್ನ ಗಾನದಿಂಪಿನಿಂದ
ನಸ್ನಿವಡೆದ ನಾಡವಿಂದು
ನಿನ್ನ ಮರೆಯ ತೊಡಗಿತಯ್ಯ—ಮೆರೆದ ಮುರಲಿಯೆ!
ನನ್ನಿ ನಲಿಯುಲೆಂದು ಮೊಳಗು—ದೇವ ಮುರಲಿಯೆ!!

——o▭o——

## ಎಂದು ಬರುವೆಯೆನ್ನ ನಲ್ಲ?

ಹರಿವ ನದಿಯ ದಂಡೆಯಲ್ಲಿ
ತೀಡುವೆಲರ ತಂಪಿನಲ್ಲಿ
ಕೂಡುತಿರುವ ವೇಳೆಯಲ್ಲಿ
ಮನವು ನಿನ್ನ ನೆನಪಿನಲ್ಲಿ—
ತಪವನೆಸಗಿ ಕಾದೆನಲ್ಲ
ಎಂದು ಬರುವೆಯೆನ್ನ ನಲ್ಲ?

ವಿವಿಧ ವರ್ಣ ಬೀರುತಲ್ಲಿ
ರಾಗರಸವ ಚೆಲ್ಲುತಲ್ಲಿ
ರವಿಯು ನಗಲು ಬಾನಿನಲ್ಲಿ
ಮನವು ನಿನ್ನ ರೂಪಿನಲ್ಲಿ—
ತಪವನೆಸಗಿ ಕಾದೆನಲ್ಲ
ಎಂದು ಬರುವೆಯೆನ್ನ ನಲ್ಲ?

ತೋಟದಲ್ಲಿ ಅಲೆಯುವಾಗ
ಅರಳಿದೆಲರ ನೋಡುವಾಗ
ಅಲರ ಮಧುವನೆನಸುವಾಗ
ಮನವು ನಿನ್ನ ವರ್ಣದಲ್ಲಿ—
ತಪವನೆಸಗಿ ಕಾದೆನಲ್ಲ
ಎಂದು ಬರುವೆಯೆನ್ನ ನಲ್ಲ?

ಎದೆಯ ತಂತಿಯನ್ನು ಮಿಡಿದು
ರಾಗ ಪ್ರೇಮವನ್ನು ಕುಡಿದು
ಧರ್ಮವರ್ಥಕಾಮ ತಿಳಿದು
ಮೋಕ್ಷದೆಡೆಗೆ ಸಾಗಲೆಂದು—
ತಪವನೆಸಗಿ ಕಾದೆನಲ್ಲ
ಎಂದು ಬರುವೆಯೆನ್ನ ನಲ್ಲ?

ಮೌನದಲ್ಲಿ ತಿರೆಯು ಮಲಗೆ
ಜೊನ್ನಕರೆದು ಚಂದ್ರಬೆಳಗೆ
ಮನದ ಭಾವವೀಜತೊಡಗೆ
ಹುಟ್ಟುಗಾರ ನಿನ್ನ ಕರೆಗೆ—
ತಪವನೆಸಗಿ ಕಾದೆನಲ್ಲ
ಎಂದು ಬರುವೆಯೆನ್ನ ನಲ್ಲ?

# ಸುಖನೀಡು ನೀ ಸದಯ

ಬಿತ್ತುದೋ ಪರ್ವತಂ ಕುಸಿಕುಸಿದು, ಮಣ್ಣೆರಚಿ
ಕಣಿವೆಯಾ ಪಸುರು ನೆಲವನ್ನು ಮಸಣವ ಮಾಡಿ;
ಕುಣಿಯುತಿಹ ಜನಜೀವನಂ ಕುಸಿದಿಹುದು ಮುದುಡಿ!
ಸತ್ತುವೋ ಸಾವೆನೆಂದೆಣಿಸದ ಪಶುಗಳರಚಿ!

ಮತ್ತುದೋ ಭೂಕಂಪವಾಗುತಿದೆಯುರುಳುತಿದೆ
ಮನೆಮಠಗಳಾ ಸೌಧಸುಂದರಾಲಯಗಳುಂ!
ಬಿನದವಾಗಿರ್ದು ಸುಖದಲಿ ಮೆರೆವ ಜನಗಳುಂ
ಸತ್ತರಕಟಕಟಧರೆಯಿಂತೇಕೆ ನುಂಗುತಿದೆ?

ಉಕ್ಕಿದುವು ಪುಣ್ಯಪೀಯೂಷಮಂ ನೀಡುತಿಹ
ನದಿನದಗಳಾ ಲೋಗರಂ ಕೊಚ್ಚಿಕೊಂಡೊಯ್ದು!
ವಿಧಿ ಮುನಿದುದೇಕೆಂದು ತಿಳಿದಿಲ್ಲವಾರಯ್ದು
ಎಕ್ಕುತಿದೆ ಅಳಿದುಳಿದ ಲೋಕವೇನೆಂಬೆನಹ!

ಆಧಿವ್ಯಾಧಿಗಳನಿಂತೊಡ್ಡಿದೇಕೆಲೆ ಒಡೆಯ?
ಬಾಧೆಗಳ ತೊರೆದೆಮಗೆ ಸುಖನೀಡು ನೀ ಸದಯ!



# ಹಾರೈಕೆ

೧

ಶಿವರೂಪವನೆ ನೋಡುತಿರಲೆನ್ನ ಕಣ್ಣುಗಳು,
ತಿರೆಯೆಲ್ಲ ತುಂಬಿರಲಿ ಶಿವರೂಪದಿಂದ!
ಶಿವಭಾವವದೆ ಮೂಡುತಿರಲೆನ್ನ ಮನದಲ್ಲಿ,
ಸ್ಥಿರವಾಗಿರಲಿ ಧರಣಿ ಶಿವಭಾವದಿಂದ!
ಶಿವನುಡಿಯುನಾಡುತಿರಲೆನ್ನ ನಾಲಗೆ ಸತತ,
ಮೆರೆದಿರಲಿ ಲೋಕವಿದು ಶಿವಸಮಯದಿಂದ!
ಶಿವಕಾರ್ಯವೆಸಗುತಿರಲೀ ನನ್ನ ಕರವೆರಡು,
ಭರಿತವಾಗಿರಲಿ ಬುವಿ ಶಿವಶಕ್ತಿಯಿಂದ!

೨

ಸತ್ಯದಲಿ ನಿತ್ಯದಲಿ ಆನಂದ ಪಡೆವಂತೆ
ತಿಳಿವನ್ನು ನೀನೀಡು ಜಗವ ಕಾಪಾಡು!
ಎಲ್ಲೆಲ್ಲು ನಿನ್ನನ್ನೆ ಕಾಣುತ್ತ, ಮಣಿಯುತ್ತ
ಮಲರಂತೆ ಅರಳುತಿಹ ಜೀವನವ ನೀಡು
ಲೋಕದಲಿ ಜೀವಿಸುವ ಚೇತನಾಚೇತನದ
ಸೌಂದರ್ಯದಂತರ್ಯವಾಗಿರುವ ದೇವ!
ಬೆದಕಾಟದೀ ಜಗವು, ಮಿಡುಕುತಿದೆ ಹಸಿವಿನಲಿ
ಸುಧೆಯಾಗು ಸಿರಿಯಾಗು ಸಂತಸವದಾಗು!

೩

ಭಕ್ತಿಯಾ ಜಲದಿ ತವಚರಣವನು ತೊಳೆಯುತ್ತ
ಒಲವಿನಾ ಅಲರನ್ನು ಅರ್ಪಿಸುವೆ ಗುರುವೆ!
ಒಪ್ಪಿಸಿದ ಪುಷ್ಪವದು ಸೌರಭವ ಸೂಸುತ್ತ
ನಿನ್ನಡಿಯೊಳಿರುವಂತೆ ಸ್ವೀಕರಿಸು ಗುರುವೆ!
ಒಲವಿಂದ ಒಡನಾಡಿ, ಮಮತೆಯಲಿ ಮಾತಾಡಿ,
ದಲಿತರನು ಉದ್ಧರಿಪ ಮತಿಯ ಕೊಡು, ಗುರುವೆ!
ಮಳೆಗರೆದು ಬೆಳೆಬೆಳೆದು, ಸಮತೆಯಲಿ ಇಳೆಬೆಳಗಿ
ಸುಖಶಾಂತಿಯನು ನೀಡು ಜಗದಾದಿ ಗುರುವೆ!

